ಶಾಂತರಸ*

# ವಿಜಯನಗರ ಸಾಮ್ರಾಜ್ಯ ಸ್ಥಾಪಕರು ವಿದ್ಯಾರಣ್ಯರಲ್ಲ -ಕಾಶಿವಿಲಾಸ ಕ್ರಿಯಾಶಕ್ತಿ ದೇವರು

"ವಿಜಯನಗರ ಸ್ಥಾಪನೆಗೆ ಪ್ರೇರಕರು ವಿದ್ಯಾರಣ್ಯರು ; ಅವರೇ ರಾಜಗುರುಗಳು. ಅವರ ತಪಶ್ಶಕ್ತಿಯಿಂದಲೇ ಈ ರಾಜ್ಯ ಸ್ಥಾಪನೆಯಾಯಿತು."

ಇದೇ ವಾದವೇ ಅರವತ್ತು, ಎಪ್ಪತ್ತು ವರ್ಷಗಳ ಹಿಂದಿನಿಂದ ನಡೆದುಬಂದಿದೆ. ಕಥೆ, ಕಾದಂಬರಿ, ಕಾವ್ಯ, ನಾಟಕ, ಲೇಖನಗಳಲ್ಲಿ ನಿರಂತರವಾಗಿ ವಿದ್ಯಾರಣ್ಯರೇ ವಿಜಯನಗರ ಸಾಮ್ರಾಜ್ಯ ಸ್ಥಾಪಕರು ಎಂದು ಬರೆಯುತ್ತ ಬಂದರು. ಆದರೆ ಈ ನಡುವೆ ಚರಿತ್ರೆಕಾರರು ಹೊರಹಾಕಿದ ಸತ್ಯವನ್ನು ನಮ್ಮ ಸಾಹಿತಿಗಳು, ಬರಹಗಾರರು ಬಳಸಿಕೊಳ್ಳದೆ ಹಳೆಯ ವಾದವನ್ನೇ ಮುಂದುವರಿಸಿಕೊಂಡು ಹೋಗಿದ್ದಾರೆ. ನಿಜವಾದ ಚರಿತ್ರೆ ನಮ್ಮ ದೇಶದಲ್ಲಿ ರಚಿತವಾಗಿಲ್ಲ, ನಿಜವಾದುದನ್ನು ಮರೆಮಾಡಿ, ತಮಗೆ ಬೇಕಾದಂತೆ ಚರಿತ್ರೆಯನ್ನು ತಿರುಚಿಕೊಳ್ಳುವ ಮನೋಭಾವ ತಾನೇ ತಾನಾದುದು ಎಲ್ಲರಿಗೂ ಗೊತ್ತಿರುವ ವಿಷಯವೇ.

ವಿದ್ಯಾರಣ್ಯರ ವಿಚಾರಕ್ಕೆ ಬರೋಣ : ವಿದ್ಯಾರಣ್ಯರು ತಪಸ್ವಿಗಳು ; ಮಹಾಜ್ಞಾನಿಗಳು. ಈ ಮಾತಿಗೆ ಎರಡಿಲ್ಲ. ಆದರೆ ಅವರು ಕ್ರಿ. ಶ. ೧೩೩೬ರಲ್ಲಿ ವಿಜಯನಗರ ಸ್ಥಾಪನೆಯಾದಾಗ ಕರ್ನಾಟಕದಲ್ಲಿಯೇ ಇರಲಿಲ್ಲ. ಶೃಂಗೇರಿ ಪೀಠದ ಅಧಿಪತಿಗಳೂ ಆಗಿರಲಿಲ್ಲ. ಆಗ ಅವರು ಕಾಶಿಯಲ್ಲಿದ್ದರೆಂದು ತಿಳಿದುಬರುತ್ತದೆ. ವಿದ್ಯಾರಣ್ಯರಂತೆ ವಿದ್ಯಾತೀರ್ಥರಾಗಲೀ, ಭಾರತೀ ತೀರ್ಥರಾಗಲೀ ಸಂಗಮ ವಂಶದ ಅರಸರಿಗೆ ಸಾಮ್ರಾಜ್ಯ ಸ್ಥಾಪಿಸಲು ನೆರವಾಗಿಲ್ಲ. ಇವರೆಲ್ಲರು ನಂತರದಲ್ಲಿ ಬಂದವರು. ಶಾಸನ, ಕಾವ್ಯ, ಇತಿಹಾಸ, ಪುರಾಣ ಯಾವುದರಲ್ಲಿಯೂ ವಿದ್ಯಾರಣ್ಯರು ರಾಜಗುರುವಾಗಿದ್ದು ಸಾಮ್ರಾಜ್ಯ ಸ್ಥಾಪನೆಗೆ ನೆರವಾದ ಉಲ್ಲೇಖವಿಲ್ಲ.

ನಮ್ಮ ದೇಶದ ಇಬ್ಬರು ಪ್ರಸಿದ್ಧ ಚರಿತ್ರೆಕಾರರು ಡಾ. ಸಾಲೆತೊರೆ ಮತ್ತು ಡಾ. ಪಿ. ಬಿ. ದೇಸಾಯಿ– ಬರೆದ ಇತಿಹಾಸವನ್ನು ನಮ್ಮ ಕಾದಂಬರಿಕಾರರು, ಸಾಹಿತಿಗಳು ನೋಡಲಿಲ್ಲ. ನೋಡಿದರೂ ಅದನ್ನು ಉಪೇಕ್ಷಿಸಿ ತಮಗೆ ಬೇಕಾದಂತೆ ಇತಿಹಾಸ ತಿರುಚಿಕೊಂಡರು. ಮತ್ತೆ ಮತ್ತೆ ಅದನ್ನೇ ಸಾರಿ ಜನ ತಮ್ಮ ಮಾತನ್ನೇ ನಂಬುವಂತೆ ಮಾಡಿದರು.

ಡಾ. ಪಿ.ಬಿ. ದೇಸಾಯಿಯವರ ಖಚಿತ ಅಭಿಪ್ರಾಯ ಇದು :

"ಈ ಸಾಮ್ರಾಜ್ಯ ಸ್ಥಾಪನೆಯ ಸಾಂಪ್ರದಾಯಿಕ ಕಾಲವಾದ ಕ್ರಿ.ಶ ೧೩೩೬ರ ಬಳಿಕ ಎರಡು ದಶಕಗಳು

---

* ನಿವೃತ್ತ ಅಧ್ಯಾಪಕರು, ೧-೯-೪೦/೧, ಅಜಾದ್‌ನಗರ, ರಾಯಚೂರು-೫೮೪ ೧೦೧

ಕಳೆದ ಮೇಲೆ ವಿದ್ಯಾರಣ್ಯರ ಸಂಬಂಧ ವಿಜಯನಗರ ದೊಡನೆ ಬೆಳೆಯಿತು ಎಂದು ಉಪಲಬ್ಧವಿರುವ ಪುರಾವೆ ತಿಳಿಸುತ್ತದೆ."[1]

ರಾಜಧಾನಿಯನ್ನು ಕಟ್ಟಲು ಹರಿಹರನಿಗೆ ವಿದ್ಯಾರಣ್ಯರು ನೆರವಾದರೆಂಬುದು ಮತ್ತು ರಾಜಧಾನಿ ಕಟ್ಟಲು ಸ್ಥಳ ನಿರ್ಣಯಕ್ಕೆ ಹುಟ್ಟಿಕೊಂಡ ನಾಯಿ ಮತ್ತು ಮೊಲದ ಕಥೆ ಇವೆಲ್ಲ ಕಾಲ್ಪನಿಕ, ಸತ್ಯವಲ್ಲ- ಎಂಬುದನ್ನು ಡಾ. ಸಾಲೆತೊರೆಯವರು ನಿರ್ಣಾಯಕ ವಾಗಿ ಹೇಳುತ್ತಾರೆ.

"ರಾಜಧಾನಿಯ ನಿರ್ಮಾಣದಲ್ಲಿ, ಹರಿಹರನಿಗೆ ವಿದ್ಯಾರಣ್ಯರು ನೆರವಿತ್ತರೆಂಬ ದಂತಕಥೆ ಮತ್ತು ನಾಯಿ ಮತ್ತು ಮೊಲದ ಪ್ರಸಂಗ ಮುಂತಾದವುಗಳನ್ನು ತರುವಾಯ ಕಾಲದ ಕಲ್ಪಿತಗಳೆಂದು ನಾವು ಅವುಗಳನ್ನು ತಳ್ಳಿಹಾಕಿಬಿಡಬಹುದು. ಆತನ ವ್ಯಾಪಕವಾದ ಪಾಂಡಿತ್ಯ ಮತ್ತು ಪ್ರಖ್ಯಾತಿಗಳಿಂದ ಪ್ರಭಾವಿತರಾಗಿ ಜನ ಈ ವಿಷಯವನ್ನು ಆತನ ತಲೆಗೆ ಕಟ್ಟಿರಬಹುದೆಂದು ಭಾವಿಸಬಹುದು.[2]

ವಿಜಯನಗರಕ್ಕೆ ವಿದ್ಯಾನಗರವೆಂಬ ಹೆಸರಿತ್ತು; ಅದು ವಿದ್ಯಾರಣ್ಯರ ಸಲುವಾಗಿಯೇ ಇಡಲಾಯಿತು ಎಂಬ ವಾದವೊಂದು ಇದೆ. "ವಿಜಯದ ಸಂಕೇತವಾಗಿ ಈ ನಗರಕ್ಕೆ 'ವಿಜಯ' ಮತ್ತು 'ವಿಜಯನಗರ' ಎಂದೇ ಕರೆಯಲಾಗಿದೆ. ವಿಜಯನಗರ ಹರಿಹರ (ಹುಕ್ಕ)ನ ಕಾಲಕ್ಕೆ ಅಸ್ತಿತ್ವದಲ್ಲಿಯೇ ಇರಲಿಲ್ಲ. ಇದನ್ನು ಬುಕ್ಕ ದೊರೆ ಕ್ರಿ. ಶ. ೧೩೬೮ರಲ್ಲಿ ನಿರ್ಮಿಸಲು ಪ್ರಾರಂಭಿಸಿದ ಮತ್ತು ಅದು ಎರಡನೆಯ ಹರಿಹರನ ಕಾಲಕ್ಕೆ ಕ್ರಿ. ಶ. ೧೩೭೮ರಲ್ಲಿ ಮುಗಿಯಿತು. ಎರಡನೆಯ ಹರಿಹರನ ಆಳಿಕೆಯಲ್ಲಿ (೧೩೭೮ರಲ್ಲಿ) ವಿಜಯನಗರ ನಿರ್ಮಾಣದ ಮುಕ್ತಾಯ ಘಟ್ಟದಲ್ಲಿ, ವಿದ್ಯಾರಣ್ಯರು ವಿಜಯನಗರಕ್ಕೆ ಬಂದಂತೆ ತೋರುತ್ತದೆ.[3]"

ಇದೇ ಅವರು ವಿಜಯನಗರಕ್ಕೆ ಮೊದಲ ಸಲ ಬಂದುದು. ಆದುದರಿಂದ ಸಾಮ್ರಾಜ್ಯ ಸ್ಥಾಪನೆಯ ಕಾಲಕ್ಕೆ ಅವರು ಅಲ್ಲಿ ಇರಲಿಲ್ಲ; ಮತ್ತು ಅವರಿಂದ ನೆರವು ದೊರಕಿಲ್ಲ.[4] "ವಿಜಯನಗರಕ್ಕೆ ವಿದ್ಯಾನಗರ ವೆಂಬ ಹೆಸರನ್ನು ಬಳಸಿದ್ದು ಕ್ರಿ. ಶ. ೧೫೩೧ ರಿಂದ ಈಚೆಗೆ....

ಇನ್ನೊಂದು ವಿಷಯ ಇಲ್ಲಿ ಗಮನಾರ್ಹವಾದುದು: ಸಂಗಮವಂಶದ ರಾಜರಿಗೆ ಕುಲಗುರುವಾಗಿದ್ದು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕನಾದವನು 'ರಾಯ ರಾಜಗುರು ಶ್ರೀಮತ್ ಕಾಶೀವಿಲಾಸ ಕ್ರಿಯಾಶಕ್ತಿ ದೇವರು' ಎಂಬುದು; ವಿದ್ಯಾರಣ್ಯರ ಪ್ರಚಾರದಲ್ಲಿ ಇವರ ಹೆಸರು ಅಡಗಿಹೋಗಿದೆ; ಕಾಶೀವಿಲಾಸ ಕ್ರಿಯಾಶಕ್ತಿ ದೇವರೇ ಸಂಗಮ ವಂಶದ ರಾಜಗುರು ಮತ್ತು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕ, ಸಲಹೆಗಾರರು ಎಂಬುದನ್ನು ಡಾ. ಸಾಲೆತೊರೆ ಮತ್ತು ಡಾ. ಪಿ.ಬಿ. ದೇಸಾಯಿ ಸಮರ್ಥಿಸಿದ್ದಾರೆ. ಡಾ. ಸಾಲೆತೊರೆ ಯವರ ಹೇಳಿಕೆ.

"........ಸ್ಥಾಪಕರೊಡನೆ ಮಹಾ ಸನ್ಯಾಸಿಯಾದ ವಿದ್ಯಾರಣ್ಯರ ಅನ್ಯೋನ್ಯ ಸಂಬಂಧವಿತ್ತೆಂದು, ಈ ಎಲ್ಲ ಕಥೆಗಳು ಹೇಳುತ್ತವೆ. ಆದರೆ ಶಾಸನಗಳು ಮತ್ತು ಸಮಕಾಲೀನ ಪುರಾವೆಗಳು ಈ ನಂಬಿಕೆಗಳನ್ನು ಅಲ್ಲಗಳೆಯುತ್ತವೆ. ಸತ್ಯವಾದ ಮಾತೆಂದರೆ: ಸಾಮ್ರಾಜ್ಯ ಸ್ಥಾಪಕರ ಕುಲಗುರು ಮೊದಲಿಗೆ ಕ್ರಿಯಾಶಕ್ತಿಯಾಗಿದ್ದನು: ವಿದ್ಯಾರಣ್ಯನಾಗಿರಲಿಲ್ಲ.[5]"

ಡಾ. ಪಿ.ಬಿ. ದೇಸಾಯಿಯವರ ಹೇಳಿಕೆ:

"Kasivilas Kriyasakti of Pasupata School was the royal preceptor and advisor of Bukka I"

---

1 Dr. P.B. Desai : A History of Karnataka 326

2 Dr. B,A. Saletore : A Social & Political Life in the Vijayanagara Empire P.110

3 ಅದೇ ಪು. ೧೧೨

4 ಅದೇ ಪು. ೧೧೨

5 ಅದೇ ಪು. ೧೦೬

"ಪಾಶುಪತ ಪಂಥದ ಕಾಶೀವಿಲಾಸ ಕ್ರಿಯಾಶಕ್ತಿ ರಾಜಗುರುವಾಗಿದ್ದನು ಮತ್ತು ಒಂದನೆಯ ಬುಕ್ಕನಿಗೆ ಸಲಹೆಗಾರನಾಗಿದ್ದನು."[6]

ಕಾಶೀವಿಲಾಸ ಕ್ರಿಯಾಶಕ್ತಿ ದೇವರನ್ನು ಕುರಿತು ಅನೇಕ ಶಾಸನಗಳಿವೆ. ಇವೆಲ್ಲ, ಇವರೇ ಸಂಗವಂಶದ ರಾಜಗುರುಗಳು ಮತ್ತು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕರೆಂಬುದನ್ನು ಸಮರ್ಥಿಸುತ್ತವೆ. ಸೊರಬ (ಕ್ರಿ. ಶ. ೧೩೪೭), ಹಾರೋಮುಚ್ಚಳ್ಳಿ ಅಗ್ರಹಾರ (ಕ್ರಿ. ಶ. ೧೩೬೮), ಹರಿಹರ (ಕ್ರಿ. ಶ. ೧೪೧೦), ಹುಲಿಕೇರಿ (ಕ್ರಿ. ಶ. ೧೩೭೮) ಮುಂತಾದ ಶಾಸನಗಳನ್ನು ಅವಲೋಕಿಸಬಹುದು. ಸ್ಥಳಾಭಾವದಿಂದ ಅವುಗಳನ್ನು ಇಲ್ಲಿ ಉದ್ಧರಿಸಲಾಗಿಲ್ಲ.[7] ವೀರ ಕಂಪಣ್ಣನ ಹೆಂಡತಿ ಗಂಗಾದೇವಿ ತನ್ನ ಐತಿಹಾಸಿಕ 'ಮಧುರಾ ವಿಜಯ' (ವೀರ ಕಂಪಣರಾಯ ಚರಿತ್ರೆ) ಎಂಬ ಸಂಸ್ಕೃತ ಕಾವ್ಯದಲ್ಲಿ ಕ್ರಿಯಾಶಕ್ತಿ ದೇವರನ್ನು ಭಕ್ತಿಯಿಂದ ಸ್ತುತಿಸುತ್ತಾಳೆ.

"ಅಸಾಧರಣ ಸಾರ್ವಜ್ಞಂ ವಿಲಸತ್ಸರ್ವ ಮಂಗಲಂ
ಕ್ರಿಯಾಶಕ್ತಿ ಗುರುಂ ವಂದೇ ತ್ರಿಲೋಚನಮಿ
ವಾಪರಂ"

ಈ ಐತಿಹಾಸಿಕ ಕಾವ್ಯದಲ್ಲಿ ವಿದ್ಯಾರಣ್ಯರ ಹೆಸರೇ ಬರುವುದಿಲ್ಲ.

ನುಂಗಲಾರದ ತುತ್ತಾದ ಈ ಐತಿಹಾಸಿಕ ದಾಖಲೆಯನ್ನು ಹೇಳಲಾರರು, ಹೇಳದೇ ಇರಲಾರರು : ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರ ಈ ಮಾತುಗಳನ್ನು ನೋಡಿ : "........ಈ ಬುಕ್ಕರಾಜನೇ ವಿಜಯನಗರ ಸಾಮ್ರಾಜ್ಯಕ್ಕೆ ಬೀಜಾವಾಪ ಮಾಡಿದವನೆಂದು ಇತ್ತೀಚಿನ ಅನ್ವೇಷಣೆಗಳಿಂದ ತಿಳಿದು ಬಂದಿದೆ. ಅವನ ಕುಲಗುರುವಾಗಿದ್ದ ಕ್ರಿಯಾಶಕ್ತಿ ದೇಶಿಕರು ವಿಜಯನಗರ ಸ್ಥಾಪನೆಗೆ ಮೂಲಪ್ರೇರಕರಾಗಿದ್ದರು.[8]" ಇದು ಸರಿಯಾದ ಹೇಳಿಕೆ, ಆದರೆ ವಿದ್ಯಾರಣ್ಯರು ಎಲ್ಲಿ ಹೋಗಬೇಕು ? ಅವರು ಇಲ್ಲದಿದ್ದರೂ ಬೇಕೇ ಬೇಕಲ್ಲ. ಅದಕ್ಕಾಗಿ ಮುಂದುವರಿದು ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರು, "ವಿದ್ಯಾರಣ್ಯರಿಗೆ ಪೂರ್ವದಲ್ಲಿ ಕ್ರಿಯಾಶಕ್ತಿ ಎಂಬ ಹೆಸರಿದ್ದಿತು" ಎಂದು ಜೋಡಿಸಿಬಿಡುತ್ತಾರೆ. ವಿದ್ಯಾರಣ್ಯ ಮತ್ತು ಕ್ರಿಯಾಶಕ್ತಿ ಒಂದೇ ಮತ್ತು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೂಲಪ್ರೇರಣೆ, ಆಂಧ್ರದಿಂದಲೇ ಬಂತೆಂಬ ಹಳೆಯ ವಾದವನ್ನು ಎತ್ತಿ ಟಿ. ಎನ್. ಮಲ್ಲಪ್ಪ ಎಂಬುವರು ಇತಿಹಾಸವನ್ನು ಹದಗೆಡಿಸಿದ್ದುಂಟು.[10]

ವಿದ್ಯಾರಣ್ಯ ಮತ್ತು ಕ್ರಿಯಾಶಕ್ತಿ ದೇವರು ಇಬ್ಬರೂ ಒಂದೇ ಎಂಬ ವಾದವನ್ನು ಡಾ. ವೆಂಕಟಸುಬ್ಬಯ್ಯನವರು ಒಪ್ಪುವುದಿಲ್ಲ : ಅದನ್ನು ಅಲ್ಲಗಳೆಯುತ್ತಾರೆ.[11] ಈ ಹಿಂದೆ ಶಾಸಕ ಶ್ರೀ ಉಮರಬ್ಬರು, ಶ್ರೀ ಎಂ. ವಿ. ಕಾಮತರು "ಚೆಲುವ ಕನ್ನಡನಾಡು" ಎಂಬ ಗ್ರಂಥದಲ್ಲಿ ಇತಿಹಾಸಕ್ಕೆ ಅಪಚಾರ ಮಾಡಿದ್ದನ್ನು ಹೊರಹಾಕಿದರು. ಇದನ್ನು ಕುರಿತು 'ಅಭಿಮಾನಿ' ಮತ್ತು 'ಸುದ್ದಿ ಸಂಗಾತಿ' ಪತ್ರಿಕೆಗಳು ಬರೆದವು. ನಾಲ್ಕು ದಿನ ಲೇಖನವನ್ನು ನಿಲ್ಲಿಸಿ 'ಚೆಲುವ ಕನ್ನಡ ನಾಡು' ತರಿಸಿ ನೋಡಿದೆ. ವಿಜಯನಗರ ಸಾಮ್ರಾಜ್ಯದ ಬಗ್ಗೆ ಅದೇ ಹಿಂದಿನ ಮಾತು. "........ಅದೇ ಕಾಲದಲ್ಲಿಯೇ ಅವರು (ವಿದ್ಯಾರಣ್ಯರು) ಹಕ್ಕ-ಬುಕ್ಕ

---

6 Dr. P.B. Desai : A History of Karnataka P. 344

7 ವೀರಶೈವ ಸಂ. ೪, ಎಸ್. ಸಿ. ನಂದೀಮಠರು ಹಾಗೂ ಗವಿದೀಪ್ತಿ ಸಂ. ೪ ಶಾಂತರಸರ ಲೇಖನ

8 ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ : 'ಕರ್ನಾಟಕದ ಇತಿಹಾಸದ ದರ್ಶನ', ಪು. ೩೫೯

9 ಅದೇ ಪು. ೩೫೯

10 The Quarterly Journal of the Mystic Society Vol. LIX Nos. 1 to 4 and Vol. LX Nos. 1 to 4 : T. N. Mallappa : Establisher of Vijayanagar Empire

11 Dr. Venkatasubbiah : Q. J. M. S. VIII P. 188

ಸೋದರರನ್ನು ಹುರಿದುಂಬಿಸಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವಂತೆ ಮಾಡಿದ್ದು.[12]"

ಯಾರೋ ಒಂದು ಕಾಲಕ್ಕೆ ಮಾಡಿದ ತಪ್ಪನ್ನು ಮುಂದೆ ಬಂದವರೆಲ್ಲ ಅದನ್ನೇ ಮುಂದುವರಿಸಿಕೊಂಡು ಹೋಗುವುದೇ ? ಅದು ಸಲ್ಲದು. ಆದ್ದರಿಂದ ವಿಜಯನಗರ ಸ್ಥಾಪನೆಗೆ ಮೂಲಪ್ರೇರಕರು ವಿದ್ಯಾರಣ್ಯರಲ್ಲ, ಕಾಶಿವಿಲಾಸ ಕ್ರಿಯಾಶಕ್ತಿ ದೇವರು.

12 ಎಂ. ವಿ. ಕಾಮತ್ : ಚೆಲುವ ಕನ್ನಡ ನಾಡು ಪು. ೩೩